## ವರದೇನಹಳ್ಳಿ ಶಾಲಾ ಮಕ್ಕಳೊಂದಿಗೆ ನಮಗಾದ ಅನುಭವ

- ಕಮಲಾ ವಿ ಮುಕುಂದ

ನಮ್ಮ ಸರ್ಕಾರಿ ಶಾಲಾ ಪದ್ಧತಿಯ ಕಲಿಕಾ ಸ್ಥಿತಿಯನ್ನು ಸುಧಾರಿಸಲೋಸುಗ ಸಾವಿರಾರು ಮಂದಿ ದುಡಿಯುತ್ತಿದ್ದಾರೆ. ಇದರ ಪರಿಣಾಮವಾಗಿ ಮಕ್ಕಳ ಮಾನಸಿಕ ಪರಿಸ್ಥಿತಿ ಉತ್ತಮಗೊಳ್ಳುತ್ತದೆ. ಈ ರೀತಿ ದುಡಿಯುತ್ತಿರುವವರ ಬಗ್ಗೆ ನನಗೆ ಅಪಾರ ಮೆಚ್ಚುಗೆ ಇದೆ. ನಾನು ಸಹ ಖುದ್ದು ಒಂದು ಅನೌಪಚಾರಿಕ ಖಾಸಗಿ ಶಾಲೆಯಲ್ಲಿ (ಸೆಂಟರ್ ಫಾರ್ ಲರ್ನಿಂಗ್ - ಸಿ ಎಫ್ ಎಲ್) ನಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದೇನೆ. ಇಲ್ಲಿ ಭಾಗಶಃ ಎಲ್ಲ ಶಿಕ್ಷಕರು ಹಾಗು ವಿದ್ಯಾರ್ಥಿಗಳು ನಗರ ಪ್ರದೇಶದ ಹಿನ್ನಲೆಯಿಂದ ಬಂದಿದ್ದೇವೆ. ಸಿ ಎಫ್ ಎಲ್ ನ ಮುಖ್ಯ ಉದ್ದೇಶ ನಮ್ಮ ಸ್ವಯಂ ತೃಪ್ತಿ ಹಾಗೂ ಸೌಕರ್ಯ ವಲಯದಿಂದ ಹೊರಬಂದು, ಪ್ರಪಂಚದ ಇತರ ಜನರೊಂದಿಗೆ ಸಂಪರ್ಕ ಸಾಧಿಸುವುದು. ಇದನ್ನು ನಾವು ಹಲವು ಬಗೆಯಲ್ಲಿ ಮಾಡುತ್ತೇವೆ. ಅದರಲ್ಲಿ ಮುಖ್ಯವಾದುದು ಹತ್ತಿರದ ಪ್ರಾಥಮಿಕ ಶಾಲೆಗಳ ಮಕ್ಕಳೊಂದಿಗೆ ಕಾಲಕಾಲಕ್ಕೆ ಬೆರೆಯುವುದು. ಈ ಅಭಿಯಾನದಲ್ಲಿ ಮೊದಲಿನಿಂದಲೂ ನಮ್ಮೊಡನೆ ವರದೇನಹಳ್ಳಿಯ ಮಕ್ಕಳು ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ. ಹೀಗಾಗಿ ನಾವು ಪ್ರತಿ ವರ್ಷವು ಈ ಶಾಲೆಯ ಮಕ್ಕಳೊಡನೆ ಸಂಪರ್ಕ ಮುಂದುವರೆಸಿದ್ದೇವೆ .

ಈ ಲೇಖನದ ಮೂಲಕ ನಾನು ವರದೇನಹಳ್ಳಿಯ ಮಕ್ಕಳಲ್ಲಿ ನಾವು ಕಂಡುಕೊಂಡ ಹಾಗೂ ಅವರೊಂದಿಗೆ ನಮಗಾದ ಅನೂಹ್ಯ ಅನುಭವಗಳನ್ನು ಹಂಚಿಕೊಳ್ಳಲು ಬಯಸುತ್ತೇನೆ. ಆದಾಗ್ಯೂ ಸರ್ಕಾರಿ ಶಾಲೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ಕೆಲಸ ಮಾಡುವವರ ಅನುಭವದ ವೈಶಾಲ್ಯ ಹಾಗೂ ಆಳಕ್ಕೆ ನಾವೆಂದು ತಲುಪಲಾರೆವು ಎಂಬ ಅರಿವಿನಿಂದ, ನಮ್ಮ ಅನಿಸಿಕೆಯನ್ನು ಅತ್ಯಂತ ವಿನಯಪೂರ್ವಕವಾಗಿ ಹಂಚಿಕೊಳ್ಳುತ್ತಿದ್ದೇನೆ.

ನಮ್ಮ ಸಿ ಎಫ್ ಎಲ್ ಶಾಲೆ ಬೆಂಗಳೂರು ನಗರದಿಂದ ನಲವತ್ತು ಕಿಲೋಮೀಟರ್ ದೂರದಲ್ಲಿರುವ ವರದೇನಹಳ್ಳಿಯಲ್ಲಿ ಇದೆ. ಅಲ್ಲಿ ಎಪ್ಪತ್ತೈದು ವಿದ್ಯಾರ್ಥಿಗಳು ಇದ್ದಾರೆ. ವರದೇನಹಳ್ಳಿಯಲ್ಲಿ ಆರ್ಥಿಕವಾದ ಎಲ್ಲ ಶ್ರೇಣಿಯ ಜನರು ನೆಲೆಸಿರುವ ಹೆಚ್ಚು ಕಮ್ಮಿ ನೂರು ಮನೆಗಳಿವೆ. ಅವರಲ್ಲಿ ಅನೇಕ ಮಂದಿಯ ಬಳಿ ಕೆಲವು ಎಕರೆಗಳಷ್ಟು ಭೂಮಿ ಇದೆ. ಇನ್ನು ಕೆಲವರು ಭೂಮಿಯ ಜೊತೆಗೆ ಟ್ರ್ಯಾಕ್ಟರ್ ಅಥವಾ ಅಂಗಡಿ ಹೊಂದಿದ್ದಾರೆ. ಮತ್ತೆ ಕೆಲವರ ಜೀವನ ದಿನಗೂಲಿಯ ಮೇಲೆ ಅವಲಂಬಿತವಾಗಿದೆ.

ವರದೇನಹಳ್ಳಿಯಲ್ಲಿ ಎರಡು ಕೊಠಡಿಗಳ ಒಂದು ಸಣ್ಣ ಕಟ್ಟಡದಲ್ಲಿ ಪ್ರಾಥಮಿಕ ಶಾಲೆ ಇದೆ. ಇದನ್ನು ಇಬ್ಬರು ಶಿಕ್ಷಕರು ಅತ್ಯಂತ ಅಕ್ಕರೆ ಮತ್ತು ಬದ್ಧತೆಯಿಂದ ನಡೆಸುತ್ತಾರೆ. ಇಲ್ಲಿ ಪ್ರಸ್ತುತ ಸುಮಾರು ಇಪ್ಪತ್ತೆರಡು ವಿದ್ಯಾರ್ಥಿಗಳು ಇದ್ದಾರೆ. ಆದರೆ ವಿದ್ಯಾರ್ಥಿಗಳ ಸಂಖ್ಯೆ ದಿನೇ ದಿನೆ ಕಡಿಮೆಯಾಗುತ್ತಿದೆ. (ನಾವು ೨೦೦೦ನೆಯ ಇಸವಿಯಲ್ಲಿ ಇಲ್ಲಿ ಮೊದಲಿಗೆ ಬಂದಾಗ ಸುಮಾರು ಅರವತ್ತು ಮಂದಿ ಮಕ್ಕಳು ಪ್ರಾಥಮಿಕ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದರು). ನಮ್ಮ ಪಕ್ಕದ ಗ್ರಾಮ ಬಾಚೇನಹಟ್ಟಿಯಲ್ಲಿ ಹಿರಿಯ ಪ್ರಾಥಮಿಕ ಶಾಲೆ ಇದೆ. ವರದೇನಹಳ್ಳಿಯ ಶಾಲೆಯಲ್ಲಿ ಅಧ್ಯಯನ ಮುಗಿಸಿದ ನಂತರ ಐದನೇ ಕ್ಲಾಸಿಗೆ ಭರ್ತಿಯಾಗಲು ಇಲ್ಲಿನ ವಿದ್ಯಾರ್ಥಿಗಳು ಬಾಚೇನಹಟ್ಟಿಗೆ ತೆರಳುತ್ತಾರೆ. ಇದಲ್ಲದೆ ಅಲ್ಲಿಗೆ ಸುತ್ತ ಮುತ್ತಲಿನ ಅನೇಕ ಗ್ರಾಮಗಳಿಂದ ಕೂಡ ಮಕ್ಕಳು ಶಾಲೆಗೆ ದಾಖಲಾಗುತ್ತಾರೆ. ಆದಾಗ್ಯೂ ಇಲ್ಲಿ ಸಹ ಶಾಲೆಗೆ ಮಕ್ಕಳ ನೋಂದಣಿ ಇತ್ತೀಚಿನ ವರ್ಷಗಳಲ್ಲಿ ಕುಸಿಯುತ್ತಿದೆ. ದೇಶದಾದ್ಯಂತ ಪ್ರಚಲಿತವಿರುವ ಅನೇಕ ಸಾಮಾಜಿಕ ಅಂಶಗಳು ಇದಕ್ಕೆ ಕಾರಣವಾಗಿರಬಹುದು ಎನಿಸುತ್ತದೆ.

ಎರಡು ಸಾವಿರದ ಇಸವಿಯಿಂದ, ನಾವು ಸರ್ಕಾರಿ ಶಾಲೆ ಹಾಗೂ ಸಿ ಎಫ್ ಎಲ್ ನ ಮಕ್ಕಳನ್ನು ಜೊತೆಗೂಡಿಸಿ (ಮಧ್ಯಮ ಮತ್ತು ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳು) ಸಣ್ಣ ಸಣ್ಣ ಯೋಜನೆಗಳನ್ನು (ಪ್ರಾಜೆಕ್ಟ್ಸ್) ಮಾಡುತ್ತಿದ್ದೇವೆ. ಈ ಅವಧಿಯಲ್ಲಿ ನಾವು ಮಕ್ಕಳನ್ನು ದ್ವಿಭಾಷಾ ನಾಟಕ, ಕ್ರೀಡೆ, ಗಣಿತ, ವಿಜ್ಞಾನ, ಚರಿತ್ರೆ, ಆಂಗ್ಲ ಭಾಷೆಯ ಹಾಡುಗಳು, ನಾಟ್ಯ, ಕುಂಬಾರಿಕೆ, ಕರಕುಶಲ ಕಲೆ (ಚಿತ್ರಕಲೆ, ರೇಖಾಚಿತ್ರ, ಕಸೂತಿ, ಕೊಲಾಜ್, ಕಾಗದದ ನೇಯ್ಗೆ) ಇವುಗಳಲ್ಲಿ ತೊಡಗಿಸಿದ್ದೇವೆ. ಇದಲ್ಲದೆ ಆಂಗ್ಲ ಭಾಷೆಯನ್ನು ಸಾಂಪ್ರದಾಯಕವಾಗಿ

ದ್ವಿತೀಯ ಭಾಷೆಯಾಗಿ ಬಳಸಿದ್ದೇವೆ. ಸಾಮಾನ್ಯವಾಗಿ ಇಂಥ ಕಾರ್ಯಕ್ರಮಗಳು ವಾರಕ್ಕೆ ತೊಂಬತ್ತು ನಿಮಿಷಗಳ ಅವಧಿಯದ್ದಾಗಿದ್ದು, ಮೂರು ತಿಂಗಳ ಮಟ್ಟಿಗೆ ಜರುಗುತ್ತದೆ.

ಈ ಅಭಿಯಾನದಲ್ಲಿ ಗ್ರಾಮೀಣ ಶಾಲೆಯ ಮಕ್ಕಳು ನಮ್ಮೊಂದಿಗೆ ಹಾಗೂ ನಮ್ಮ ಶಾಲಾ ಮಕ್ಕಳೊಂದಿಗೆ ಬಲು ಬೇಗ ಪ್ರೀತಿಯ ಕೊಂಡಿ ಬೆಸೆಯುತ್ತಾರೆ. ಈ ಮಕ್ಕಳು ವಾರಕ್ಕೊಮ್ಮೆ ನಡೆಯುವ ಚಟುವಟಿಕೆಗಳಲ್ಲಿ ಭಾಗವಹಿಸಲು ಹಾಗೂ ಬೇರೆ ಜನರೊಂದಿಗೆ ಬೆರೆಯಲು ಅತ್ಯಂತ ಉತ್ಸುಕರಾಗಿರುತ್ತಾರೆ. ನಾವು ಸೂಚಿಸಿದ ಯಾವುದೇ ಕಾರ್ಯವನ್ನು ಕಲಿಯಲು ಮತ್ತು ಮಾಡಲು ಅವರು ಆಸ್ಥೆ ತೋರುತ್ತಾರೆ. ಆದರೆ ಕೆಲವರು (ಸಾಮಾನ್ಯವಾಗಿ ಹೆಣ್ಣು ಮಕ್ಕಳು ಹಾಗು ಬಡ ಕುಟುಂಬದಿಂದ ಬಂದ ಮಕ್ಕಳು) ನಾಚಿಕೆ ಸ್ವಭಾವದಿಂದ ಕೂಡಿರುತ್ತಾರೆ. ವರದೇನಹಳ್ಳಿಯ ಮಕ್ಕಳ ಆತ್ಮ ವಿಶ್ವಾಸ ತಮ್ಮ ಜಾತಿ - ವರ್ಗದ ಅನುಸಾರ ಹಾಗೂ ಆರ್ಥಿಕ ಸ್ಥಿತಿ - ಗತಿ, ಮೈಬಣ್ಣ, ಗಾತ್ರದ ಮೇಲೆ ಅವಲಂಬಿಸಿರುತ್ತದೆ. ಬಹುಶಃ ಅವರು ದೊಡ್ಡವರನ್ನು ನೋಡೀ ತಾವೂ ಇವನ್ನು ಅನುಕರಿಸುತ್ತಾರೆನಿಸುತ್ತೆ. ತಾವು ಯಾರೊಂದಿಗೆ ಕೆಲಸ ಮಾಡುತ್ತಾರೋ ಅಥವಾ ಬೆರೆಯುತ್ತಾರೋ ಅನ್ನುವುದು ಅವರು ಮಾಡಿಕೊಳ್ಳುವ ಗುಂಪುಗಳೇ ನಿರ್ಧರಿಸುತ್ತದೆ.

ಆದರೆ ಇದ್ದಕ್ಕಿದ್ದಂತೆ ಅತ್ಯಂತ ವಿಧೇಯರು ಹಾಗೂ ನಿಗ್ರಹಿಗಳಂತೆ ಇದ್ದ ಮಕ್ಕಳು ಸಂಬಾಳಿಸಲು ಆಗದಷ್ಟು ತುಂಟರಾಗಿ ಪರಿವರ್ತನೆಗೊಂಡರು. ಮೊದಮೊದಲು ನಾವು ಮಕ್ಕಳ ಶಾಲೆಗಳಿಗೆ ಭೇಟಿ ಕೊಟ್ಟಾಗ ಮತ್ತು ಅನಂತರ ಕೆಲ ವಾರಗಳು ಸಿ ಎಫ್ ಎಲ್ ಗೆ ಬರುವಾಗ ಅವರ ವರ್ತನೆ ಬಹಳ ಉತ್ತಮ ಮಟ್ಟದಲ್ಲಿರುತ್ತಿತ್ತು. ನಾವು ಇಲ್ಲಿ ಕಲಿಕೆಗಾಗಿ ಅವರಿಗೆ ಒದಗಿಸಿರುವ ಸ್ಥಳ ಬಹುಮಟ್ಟಿಗೆ ಅಸಂಘಟಿತವಾಗಿರುತ್ತದೆ. ಮಕ್ಕಳ ಚಲನೆಗೆ ಅಡ್ಡಿಯಾಗದಿರಲೆಂದು ಕುರ್ಚಿ ಮೇಜುಗಳನ್ನು ಹಾಕುವುದಿಲ್ಲ, ಅವರ ಗಮನ ಸೆಳೆಯಲು ಕಪ್ಪು ಹಲಗೆಯನ್ನು ಸಹ ಬಳಸುವುದಿಲ್ಲ. ಹಾಗೂ ಮಕ್ಕಳು ಯಾವುದೇ ಯಂತ್ರಗಳ ಬಳಕೆ ಮಾಡುವ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲಿ ಎಂಬ ನಿರ್ಬಂಧ ಹೇರುತ್ತಿರಲಿಲ್ಲ. ಬಹು ಮುಖ್ಯವಾಗಿ ಮಕ್ಕಳಿಗೆ ಈ ಹಿಂದೆ ಲಭ್ಯವಿದ್ದ ಸ್ಥಳಕ್ಕಿಂತ ವಿಶಾಲವಾದ ಸ್ಥಳಾವಕಾಶವಿತ್ತು. ನಾವು ಸಹ ಮಕ್ಕಳು ಒಂದೊಂದು ಅಭ್ಯಾಸದಲ್ಲಿ ತೊಡಗಿಸಿಕೊಂಡಾಗಲೂ ಆರಾಮವಾಗಿ ಓಡಾಡಿಕೊಂಡಿರಲಿ ಎಂದು ಬಯಸುತ್ತೇವೆ. ಈ ರೀತಿ ಕೆಲವು ಚಟುವಟಿಕೆಗಳಾದ ನಂತರ ಮಕ್ಕಳನ್ನು ನಿಗ್ರಹಿಸುವುದು ಸ್ವಲ್ಪ ಕಷ್ಟವಾಗುತ್ತಿತ್ತು. ಆಗ ನಮ್ಮ ಸಿ ಎಫ್ ಎಲ್ ವಿದ್ಯಾರ್ಥಿಗಳು ಈ ಮಕ್ಕಳು ಮಾಡಿದ ಅವ್ಯವಸ್ಥೆಯನ್ನು ತಹಬಂದಿಗೆ ತರಲು ಪ್ರಯತ್ನಿಸುತ್ತಿದ್ದರೆ, ನಾನು ಮಾತ್ರ ಹಿಂದೆ ಸರಿದು ನಿಂತು ಈ ಮೋಜನ್ನು ಸವಿಯುತ್ತಿದ್ದೆ. ಪರಿಸ್ಥಿತಿ ಕೈ ಮೀರಿ ಹೋಗುತ್ತಿದೆ ಅಂದಾಗ ಮಾತ್ರ ಮಕ್ಕಳನ್ನು ಹದ್ದುಬಸ್ತಿಗೆ ತರಲು 'ಆಂಟಿ ಕರೀತೀನಿ, ಆಂಟಿ ಬರ್ತಿದಾರೆ' ಅಂದರೆ ಸಾಕು, ಆ ತಂತ್ರ ಯಾವಾಗಲೂ ಕೆಲಸ ಮಾಡುತ್ತದೆ!

ನಾನು ಈ ಮೊದಲೇ ಹೇಳಿದಂತೆ, ಮಕ್ಕಳ ಚಟುವಟಿಕೆಗಳನ್ನು ಯಾವ ರೀತಿ ಕಟ್ಟಿಕೊಡುತ್ತಿದ್ದೆವು ಅಂದರೆ ಅವರು ಸ್ವತಂತ್ರವಾಗಿ ಯೋಚಿಸಿ, ತಮ್ಮ ಸೃಜನಾತ್ಮಕತೆ ಮತ್ತು ಅಭಿವ್ಯಕ್ತಿಗಳನ್ನು ಹುಡುಕಲು ಪ್ರೇರೇಪಿಸಲು ಸಹಾಯ ಮಾಡುವಂತಹುದನ್ನು. ನಮಗೆ ತಿಳಿದಂತೆ ಆ ಮಕ್ಕಳಿಗೆ ಹೇಳಿಕೊಟ್ಟಿದ್ದನ್ನು ಹೇಳುವುದು, ನಕಲು ಮಾಡುವುದು ಮತ್ತು ಒಂದೇ ಧ್ವನಿಯಲ್ಲಿ ಮಾತನಾಡುವುದು ಇತ್ಯಾದಿಗಳಲ್ಲಿ ತರಬೇತಿ ದೊರಕಿರುತ್ತದೆ. ಸಿ ಎಫ್ ಎಲ್ ಕ್ಲಾಸಿನಲ್ಲಿ ಮಕ್ಕಳನ್ನು ಕುರಿತು - "ನಿಮಗೇನನ್ನಿಸುತ್ತದೆ?" ಇನ್ನೊಬ್ಬರ ಪುಸ್ತಕ ನೋಡಬೇಡ, ನಿನಗೆ ಹೇಗೆ ಕಾಣುತ್ತದೆಯೋ ಹಾಗೆಯೇ ಚಿತ್ರ ಬರೆ ಈ ರೀತಿ ಅವಕಾಶಗಳನ್ನು ಕಲ್ಪಿಸಲಾಗುತ್ತದೆ. ಇದರಿಂದ ನಮಗೆ ಕೆಳಗಿನಂತೆ ಅನುಭವ ಆಗಿದೆ.

ಪ್ರತಿ ಬಾರಿ ಮಕ್ಕಳನ್ನು ಚಿತ್ರ ಬಿಡಿಸಿ ಎಂದಾಗ ಎಲ್ಲರೂ ಮೂರು ಮೆಟ್ಟಿಲುಗಳಿರುವ ಧ್ವಜ, ಸ್ತಂಭ ಹಾಗೂ ಭಾರತದ ಬಾವುಟ ಬಿಡಿಸುತ್ತಿದ್ದರು. ಒಂದು ಗಿಡವನ್ನು ಬಿಡಿಸಿ ಎಂದು ಕೇಳಿದಾಗ ಎಲ್ಲ ಮಕ್ಕಳೂ ಹೆಚ್ಚು ಕಮ್ಮಿ ಒಂದೇ ವಿಧವಾದ ಗಿಡವನ್ನು ಬಿಡಿಸುತ್ತಿದ್ದರು. ಆಗ ನಾವು ಆ ಮಕ್ಕಳನ್ನು ಒಂದು ಗಿಡದ ಬಳಿ ಕುಳ್ಳರಿಸಿ ಈ ಗಿಡದ ಚಿತ್ರ ಬಿಡಿಸಿ ಎಂದು ಹೇಳಿದಾಗಲೂ ಸಹ ಅನೇಕ ಮಕ್ಕಳು ತಮ್ಮ ಕಲ್ಪನೆಯಲ್ಲಿ ಮೂಡಿರುವ ಗಿಡದ ಚಿತ್ರವನ್ನೇ ಮತ್ತೆ ಬಿಡಿಸುತ್ತಿದ್ದರು. ಕ್ರಮೇಣ ಪದೇ ಪದೆ ತಾಳ್ಮೆಯಿಂದ ಮತ್ತು ಒತ್ತಾಯಪೂರ್ವಕವಾಗಿ ಹೇಳಿದಾಗ ತಾವು ನೋಡಿ ಗಮನಿಸಿದ ಗಿಡದ ಚಿತ್ರ ಬಿಡಿಸುತ್ತಿದ್ದರು. ಈ ಪ್ರಕ್ರಿಯೆಯನ್ನು ಅವಲೋಕಿಸುವುದು ನಿಜಕ್ಕೂ ಬಹಳ ಸುಂದರ ಅನುಭವ.

ಒಮ್ಮೆ ನಾವು ಏಳನೆಯ ತರಗತಿಯ ವಿದ್ಯಾರ್ಥಿಗಳಿಗೆ ಅವರ ಮುಂದೆ ಇರಿಸಿದ ಒಂದು ಘನ ಪೆಟ್ಟಿಗೆಯ ಚಿತ್ರ ಬರೆಯಿರಿ ಎಂದು ಹೇಳಿದೆವು. ಮಕ್ಕಳು 3ಆಯಾಮದ ಆಕೃತಿಯನ್ನು ನೋಡಿಕೊಂಡು 2 ಆಯಾಮದ ಕಾಗದದ ಮೇಲೆ ಚಿತ್ರಿಸಬೇಕು ಎಂಬುದು ನಮ್ಮ ಆಶಯವಾಗಿತ್ತು. ಇದನ್ನು ಕಾರ್ಯಗತಗೊಳಿಸುವುದು ಅಷ್ಟು ಸುಲಭ ಸಾಧ್ಯವಾದ ಮಾತಲ್ಲ. ಏಕೆಂದರೆ ಅದನ್ನು ಮಾಡುವ ಯುಕ್ತಿ ಕಲಿಯುವ ಅವಶ್ಯಕತೆಯಿತ್ತು(ಚಿತ್ರವನ್ನು ನೋಡಿ) ಹಾಗೂ ಅವರಿಗೆ ಈಗಾಗಲೇ ತಿಳಿದಿರುವ ಯಾವುದನ್ನೇ ಆಗಲಿ ಕಾಗದದ ಮೇಲೆ ತಕ್ಷಣ ಇಳಿಸಲಾಗುವುದಿಲ್ಲ. ಈ ಅಭಿಯಾನದಲ್ಲಿ ಅನೇಕ ಸೃಜನಾತ್ಮಕ ಹಾಗೂ ಅಸಾಮಾನ್ಯ ರೇಖಾಚಿತ್ರಗಳು ಹೊರಬಂದವು. ಆದರೆ ನಾವು ಒಮ್ಮೆ ಯಾವುದಾದರೂ ಚಿತ್ರವನ್ನು ಚೆನ್ನಾಗಿದೆ ಎಂದು ಮೆಚ್ಚಿಕೊಂಡರೆ, ಉಳಿದವರು ತಮ್ಮ ಪ್ರಯತ್ನವನ್ನೆಲ್ಲ ಬದಿಗಿಟ್ಟು ನಾವು ಮೆಚ್ಚುಗೆ ವ್ಯಕ್ತಪಡಿಸಿದ ಚಿತ್ರವನ್ನು ನಕಲು ಮಾಡಲು ಪ್ರಾರಂಭಿಸುತ್ತಿದ್ದರು !

ಇಂಥ ಪ್ರವೃತ್ತಿಯ ಅತಿರೇಕವಾದ ಉದಾಹರಣೆ ನಮಗೆ ಐದನೆಯ ತರಗತಿಯ ಮಕ್ಕಳು ಚರಿತ್ರೆ ಬಗ್ಗೆ ಮಾಡುತ್ತಿದ್ದ ಚಟುವಟಿಕೆಯಲ್ಲಿ ಕಾಣಸಿಕ್ಕಿತು (ನಾವು ದೀಪಾ ಧನರಾಜ್ ಅವರ ಚಲನಚಿತ್ರವನ್ನು ಕಲ್ಪನೆ ಮತ್ತು ಸ್ಫೂರ್ತಿಗಾಗಿ ಬಳಸಿಕೊಳ್ಳುತ್ತಿದ್ದೆವು). ಮಕ್ಕಳು ತಮ್ಮ ಅಜ್ಜಿ - ತಾತಂದಿರಿಂದ ಪ್ರಾರಂಭಿಸಿ ವಂಶ ವೃಕ್ಷವನ್ನು ಬರೆಯುವುದನ್ನು ಕಲಿಯುತ್ತಿದ್ದರು. ಈ ಚಟುವಟಿಕೆಯನ್ನು ಅವರು ತಮ್ಮ ತಮ್ಮ ಮನೆಗಳಲ್ಲಿ ಅವರ ಕುಟುಂಬದ ಸದಸ್ಯರ ಸಹಾಯದಿಂದ ಎಷ್ಟು ಸಾಧ್ಯವೋ ಅಷ್ಟು ಹೆಸರುಗಳನ್ನು ಸಂಗ್ರಹಿಸಿ ಮಾಡಬೇಕಿತ್ತು. ಮುಂದಿನ ವಾರ ಮಕ್ಕಳಿಗೆ ನಿಮ್ಮ ಚಟುವಟಿಕೆಯ ಹಾಳೆ ತೋರಿಸಿ ಎಂದು ಕೇಳಿದಾಗ, ವಿದ್ಯಾರ್ಥಿನಿಯರು ಮುಸಿ ಮುಸಿ ನಗುವಿನ ಮಧ್ಯೆ ಒಂದೇ ತರನಾದ ವಂಶ ವೃಕ್ಷದ ಚಿತ್ರ ತೋರಿಸಿದರು ! ಅಷ್ಟೇ ಅಲ್ಲದೆ ತಾವೆಲ್ಲ 'ಉತ್ತಮ ವಿದ್ಯಾರ್ಥಿನಿ ' ಎಂದು ಹೆಸರು ಗಳಿಸಿದ್ದ ಅನುಸೂಯಳ ಚಟುವಟಿಕೆಯನ್ನು ನಕಲು ಮಾಡಿರುವುದಾಗಿ ಹೇಳಿದರು. ನಾನು ಹುಡುಗರತ್ತ ದೃಷ್ಟಿ ಹರಿಸಿದೆ. ಅವರು ತಕ್ಷಣ ಅನುಸೂಯಳ ಚಟುವಟಿಕೆಯ ಹಾಳೆಯನ್ನು ಕಸಿದುಕೊಂಡು ತಾವು ಸಹ ಅದನ್ನೇ ನಕಲು ಮಾಡತೊಡಗಿದರು ! ಅನುಸೂಯಳ ಅಜ್ಜಿ ಎಲ್ಲರ ಅಜ್ಜಿಯು ಆಗಲ್ಲ ಎಂಬ ನನ್ನ ಮಾತು ಅವರ ನಗುವಿನ ಅಲೆಯ ಮಧ್ಯೆ ಅವರನ್ನು ಮುಟ್ಟಲು ಸ್ವಲ್ಪ ಸಮಯವೇ ಬೇಕಾಯಿತು.

ಅನೇಕ ವರ್ಷಗಳಿಂದ ನಾವು ಸಿ ಎಫ್ ಎಲ್ ಹಾಗೂ ಗ್ರಾಮೀಣ ಪ್ರದೇಶದ ಮಕ್ಕಳಿಗೆ ಹೋಲಿಕೆ ಮಾಡಿ ನೋಡಿದಾಗ ಕೆಲವು ಸಂಗತಿಗಳು ನಮ್ಮನ್ನು ಕಾಡಿವೆ. ಮೊದಲಿಗೆ ವರದೇನಹಳ್ಳಿಯ ವಿದ್ಯಾರ್ಥಿಗಳು ತಮ್ಮ ಪ್ರಾಯದ ಸಿ ಎಫ್ ಎಲ್ ಮಕ್ಕಳಿಗಿಂತ ಕೃಶರಾಗಿರುತ್ತಿದ್ದರು. ಸಾಮಾನ್ಯ ಅಂಕಿ ಅಂಶಗಳ ಪ್ರಕಾರ, ಭಾರತದ ಗ್ರಾಮೀಣ ಪ್ರದೇಶದ ಮಕ್ಕಳ ದೈಹಿಕ ಬೆಳವಣಿಗೆ ಕುಂಠಿತಗೊಂಡಿರುತ್ತದೆ ಎಂಬ ಅರಿವು ನನಗಿತ್ತು. ಆದರೂ ಅದನ್ನು ಕಣ್ಣಾರೆ ಕಂಡಾಗ ನಿಜಕ್ಕೂ ನನಗೆ ಆಘಾತವಾಗುತ್ತಿತ್ತು ಏಕೆಂದರೆ ಈ ಗ್ರಾಮಸ್ತರು ವಿಶೇಷವಾಗಿ ಕಡು ಬಡವರೇನು ಆಗಿರಲಿಲ್ಲ.

ಎರಡನೆಯದಾಗಿ, ಮಕ್ಕಳು ಬುದ್ಧಿಮತ್ತೆ ಹಾಗೂ ಉತ್ಸಾಹದಿಂದ ಕೂಡಿದ್ದರೂ ಸಹ, ನಾವು ಅವರಿಗಾಗಿ ನಿರೂಪಿಸುವ ಕೆಲವು ಅತ್ಯಂತ 'ಸರಳ' ಚಟುವಟಿಕೆಗಳು (ಉದಾಹರಣೆಗೆ ಲಯಬದ್ಧವಾಗಿ ಚಪ್ಪಾಳೆ ತಟ್ಟುವುದು ಇತ್ಯಾದಿ) ಅವರಿಗೆ ಕಷ್ಟಸಾಧ್ಯ ಎನಿಸುವುದು ನಮಗೆ ಆಶ್ಚರ್ಯ ತರುತ್ತಿತ್ತು.

ಮೂರನೆಯದಾಗಿ, ಅವರಿಗೆ ಆಂಗ್ಲ ಭಾಷೆಯ ವ್ಯಾಕರಣ ಹಾಗು ಉಚ್ಚಾರ ಸತತವಾದ ಸಮಸ್ಯೆಯಾಗಿತ್ತು (ನಾವು ಅವರಿಗೆ ಕಲಿಸುವ ಅತಿ ಸಾಮಾನ್ಯ ಆಂಗ್ಲ ವಾಕ್ಯಗಳು ಒಂದೇ ವಾರದಲ್ಲಿ ವಿಕೃತಗೊಂಡು, ಅದು ಅವರ ಮನಃಪಟಲದಲ್ಲಿ ಶಾಶ್ವತವಾಗಿ ಉಳಿದುಬಿಡುತ್ತದೆ). ಬಹುಶಃ ನಾವು ಗಮನಿಸಿದ ಈ ಅಂಶದ ಕೊಂಡಿ ಎಲ್ಲೋ ಇರಬಹುದು. ಮನಶಾಸ್ತ್ರದ ಸಂಶೋಧನೆಗಳ ಪ್ರಕಾರ ಮೆದುಳಿನಲ್ಲಿ ಸಾಮರ್ಥ್ಯಗಳು 'ಕಾರ್ಯನಿರ್ವಾಹಕ ಕ್ರಿಯೆಗಳು' ಎಂಬಂತೆ ಗುಂಪು ಗುಂಪಾಗಿ ಕೆಲಸ ನಿರ್ವಹಿಸುತ್ತವೆ. ಇದು ಶಾಲಾ ಜೀವನ ಹಾಗೂ ನಿತ್ಯ ಜೀವನದಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತದೆ.

ಇತ್ತೀಚಿನ ಹಾರ್ವಾರ್ಡ್ ವಿಶ್ವವಿದ್ಯಾನಿಲಯದ ಪ್ರಕಟಣೆ ಹೀಗೆ ಹೇಳುತ್ತದೆ.

"... ಮಾಹಿತಿಯನ್ನು ಗ್ರಹಿಸುವ ಶಕ್ತಿ, ಅದನ್ನು ಕೆಲಸ ಕಾರ್ಯದಲ್ಲಿ ಬಳಸಿಕೊಳ್ಳುವಿಕೆ, ಗಮನವಿಟ್ಟು ಯೋಚಿಸುವುದು, ಗಮನ ಸೆಳೆಯುವ ವಿಷಯಗಳ ಮೇಲೆ ನಿಗ್ರಹ, ವಿಷಯ ಬದಲಾವಣೆ ಇಂತಹ ಸಾಮರ್ಥ್ಯಗಳನ್ನು ವಿಜ್ಞಾನಿಗಳು ಕಾರ್ಯನಿರ್ವಾಹಕ ಕ್ರಿಯೆ ಮತ್ತು ಸ್ವಯಂ ನಿರ್ವಹಣೆ ಎಂದು ಹೇಳುತ್ತಾರೆ.."

ಮೇಲಿನ ಈ ವಿವರಣೆ ವರದೇನಹಳ್ಳಿಯ ಮಕ್ಕಳಿಗೆ ಹೇಳಿ ಮಾಡಿಸಿದಂತಿದೆ.

ಈ ತೊಂದರೆಗಳ ಮೂಲ ಕಾರಣವೇನು? ವರದೇನಹಳ್ಳಿ ಮಕ್ಕಳಿಗೆ ಓದುವ ಅಥವಾ ಒಳಾಂಗಣ ಹಾಗೂ ಹೊರಾಂಗಣ ಕ್ರೀಡೆಗಳಂತಹ ಅರಿವನ್ನು ಬಳಸುವ ಚಟುವಟಿಕೆಗಳಿಗೆ ಮನೆ, ಶಾಲೆ, ಅವರ ಪರಿಸರಗಳಲ್ಲಿ ಹೆಚ್ಚಿನ ಅವಕಾಶಗಳಿಲ್ಲದಿರುವುದೇ? ಅಥವಾ ಚಿಕ್ಕಂದಿನಿಂದಲೂ ಪೌಷ್ಠಿಕಾಂಶದ ಕೊರತೆಯೇ? ೨೦೦೭ ಇಸವಿಯಲ್ಲಿ 'ಮಕ್ಕಳ ಅಭಿವೃದ್ಧಿ' ಎಂಬ ಹೆಸರಿನ ಲಾನ್ಸೆಟ್ ಪೇಪರಿನಲ್ಲಿ, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಅಪಾಯದ ಅಂಶಗಳಿಂದ ಉಂಟಾಗುವ ಪ್ರತಿಕೂಲ ಪರಿಣಾಮಗಳು ಎಂಬ ಶೀರ್ಷಿಕೆಯಡಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಲಕ್ಷಾಂತರ ಮಕ್ಕಳು ಶಾಲೆಗೆ ಹೋಗಲು ತಯಾರಾಗಿದ್ದಾರಾ ಎಂಬುದು ಮತ್ತು ಅವರ ಸಾಧನೆಗಳು ನಾಲ್ಕು ಮುಖ್ಯ ಅಂಶಗಳ ಮೇಲೆ ಅವಲಂಬಿಸಿವೆ ಎಂದು ಬರೆದಿದ್ದಾರೆ. ಅವು ಯಾವುವು ಎಂದರೆ ಕುಂಠಿತಗೊಂಡ ಬೆಳವಣಿಗೆ, ಅಸಮರ್ಪಕ ಅರಿವು, ಐಯೋಡಿನ್ ಕೊರತೆ, ಕಬ್ಬಿಣದ ಅಂಶದ ಕೊರತೆಯಿಂದ ಉಂಟಾಗುವ ಅನಿಮಿಯಾ.

ಪೌಷ್ಠಿಕತೆ, ಕುಂಠಿತ ಬೆಳವಣಿಗೆ ಹಾಗೂ ಕಾರ್ಯನಿರ್ವಾಹಕ ಕ್ರಿಯೆಗಳ ನಡುವೆ ಒಂದು ಅವಿನಾಭಾವ ಸಂಬಂಧ ಇರುತ್ತದೆ. ಸಿ ಎಫ್ ಎಲ್. ವರದೇನಹಳ್ಳಿ ಮಕ್ಕಳಿಗೆ ಮೊಟ್ಟೆ, ಹಾಲು ಮತ್ತು ಹಣ್ಣು ಸರಬರಾಜು ಮಾಡತೊಡಗಿತು. ಕೆಲ ವರ್ಷಗಳ ನಂತರ ಸರ್ಕಾರವು ಸಹ ಇಂತಹುದೇ ಯೋಜನೆಯನ್ನು ಜಾರಿಗೊಳಿಸಿದ್ದು ಸ್ವಾಗತಾರ್ಹ. ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಕರು ಅನೇಕ ಆಸಕ್ತಿದಾಯಕ ಚಟುವಟಿಕೆಗಳನ್ನು ಹೊರ ತಂದಿದ್ದಾರೆ. ಇದಕ್ಕೆ ಅವರು ಶಾಲೆಯ ಒಳಗೆ ನಡೆಸುವ ಕಾರ್ಯಾಗಾರಗಳು ಮತ್ತು ಶಿಕ್ಷಕರಾಗಿ ಅವರು ಹೊಂದಿರುವ ಏಳಿಗೆಯೇ ಮುಖ್ಯ ಕಾರಣ. ಹಲವು ವರ್ಷಗಳಿಂದ ಅವರ ಶಾಲಾ ಮಕ್ಕಳೊಡನೆ ಬೆರೆಯಲು ಬಯಸುವ ನಮ್ಮ ಇಚ್ಛೆಯನ್ನು ಈ ಶಿಕ್ಷಕರು ಮುಕ್ತವಾಗಿ ಒಪ್ಪಿ ಸಹಕಾರ ನೀಡಿದುದಕ್ಕೆ ನಾನು ಅವರಿಗೆ ಋಣಿಯಾಗಿದ್ದೇನೆ.

ಇಲ್ಲೇ ಹತ್ತಿರದಲ್ಲಿರುವ ಇನ್ನೊಂದು ಶಾಲೆಯಲ್ಲಿ ನಮ್ಮ ಹಿರಿಯ ಸಹೋದ್ಯೋಗಿಗಳು ಆರು ಮತ್ತು ಏಳನೆಯ ತರಗತಿಯ ಮಕ್ಕಳೊಡನೆ ಅರವಿಂದ ಗುಪ್ತಾ ಅವರ 'ಪಂಪ್ಸ್ ಫ್ರಮ್ ದಿ ಡಂಪ್ಸ್' ಎಂಬ ವಿಷಯದ ಬಗ್ಗೆ ಕೆಲಸ ಮಾಡುತ್ತಿದ್ದರು. ಅಲ್ಲಿನ ಮುಖ್ಯೋಪಾಧ್ಯಾಯರು "ನೀವು ಪಠ್ಯ ಪುಸ್ತಕವನ್ನು ಆಧರಿಸಿ ಏನಾದರೂ ಮಾಡುತ್ತಿದ್ದರೆ ವಿದ್ಯಾರ್ಥಿಗಳಿಗೆ ಉಪಯೋಗವಾಗುತ್ತಿತ್ತು" ಎಂಬ ಮಾತನ್ನು ಹೇಳಿದರು. ಆದರೆ ವರದೇನಹಳ್ಳಿ ಶಾಲೆಯ ಶಿಕ್ಷಕರು ಈ ರೀತಿ ಎಂದೂ ನಮ್ಮ ಅಧಿವೇಶನಗಳ (ಚಟುವಟಿಕೆಗಳ) ಮೌಲ್ಯವನ್ನು ಪ್ರಶ್ನಿಸಿಲ್ಲ. ಇನ್ನು ಮುಂದೆ ಸಹ ನಾವು ಅವರ ನಂಬಿಕೆ ಉಳಿಸಿಕೊಳ್ಳುತ್ತೇವೆ ಎಂದು ಆಶಿಸುತ್ತೇವೆ.

ವರದೇನಹಳ್ಳಿ ವಿದ್ಯಾರ್ಥಿಗಳೊಡನೆ ನಮ್ಮ ಒಡನಾಟದಿಂದ ನಾವು ಎಷ್ಟೋ ವಿಷಯಗಳನ್ನು ಕಲಿತಿದ್ದೇವೆ ಮತ್ತು ಅದರಿಂದ ಲಾಭ ಗಳಿಸಿದ್ದೇವೆ. ಮಕ್ಕಳಿಂದ ದೊರೆತ ಅವರ ಬೇಷರತ್ತು ಪ್ರೀತಿ, ಉತ್ಕಟ ಅನುಭವಗಳು, ಚಟುವಟಿಕೆಗಳು ನಡೆಯುವಾಗ ಅವರು ಪ್ರದರ್ಶಿಸಿದ ಶಕ್ತಿ ಮತ್ತು ಉತ್ಸಾಹ ನಿಜಕ್ಕೂ ಅಮಲೇರಿಸುವಂತೆ ಮಾಡುತ್ತದೆ. ಇತ್ತ ಸಿ ಎಫ್ ಎಲ್ ವಿದ್ಯಾರ್ಥಿಗಳಾದರೋ ಕೆಲವೊಮ್ಮೆ ತಮ್ಮ ತಮ್ಮಲ್ಲೇ ತೋರದಿರುವ ತಾಳ್ಮೆ, ದಯೆ ಇತ್ಯಾದಿಗಳನ್ನು ಈ ಗ್ರಾಮೀಣ ಮಕ್ಕಳಿಗೆ ತೋರಿದ್ದಾರೆ. ಇತರರ ಕಲಿಕೆಯ ಹೊಣೆಯನ್ನು ತಾವು ಹೊರಲು ಸಿ ಎಫ್ ಎಲ್ ಮಕ್ಕಳಿಗೆ ಇದೊಂದು ಒಳ್ಳೆಯ ಅವಕಾಶ.

ಉಲ್ಲೇಖಗಳು (ರೆಫರೆನ್ಸ್)

1) ಸಂಕ್ಷಿಪ್ತ ಕಾರ್ಯಕಾರಿ ಕಾರ್ಯ: ಜೀವನ ಮತ್ತು ಕಲಿಕೆಯ ಕೌಶಲ್ಯಗಳು. www.developingchild.harvard.edu

2) ವಾಕರ್ ಎಸ್ ಪಿ , ವಕ್ಸ್ ಟಿ , ಗಾರ್ಡನೆರ್ ಜೆ ಎಂ , ಲೊಝೋಫ್ ಬಿ , ವಾಸ್ಸೆ ಮ್ಯಾನ್ ಜಿ ಎ , ಪೊಲಿಟ್ ಜಿ , ಕಾರ್ಟರ್ ಜೆ ಎ (೨೦೦೭), ಮಕ್ಕಳ ಬೆಳವಣಿಗೆ , ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಪಾಯಕರ ಅಂಶಗಳಿಂದ ಮಕ್ಕಳ ಮೇಲಾಗುವ ಪ್ರತಿಕೂಲ ಪರಿಣಾಮಗಳು . ಲಾನ್ಸೆಟ್ ೩೬೯, ೧೪೫- ೫೭.